

# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 04-03-2021 ಪ್ರಶ್ನೆ ಸಂಖ್ಯೆ : 571 (700)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀಮತಿ ಎಸ್. ವೀಣಾ ಅಚ್ಚಯ್ಯ(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 04-03-2021

ಉತ್ತರಿಸುವ ಸಚಿವರು: ಮಾನ್ಯ ಯುವ ಸಬಲೀಕರಣ ಮತ್ತು ಕ್ರೀಡೆ ಹಾಗೂ ಯೋಜನಾ ಸಚಿವರು

ವಿಷಯ : ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಅನುದಾನ ಬಿಡುಗಡೆ ಕುರಿತು

(ಅ) ರಾಜ್ಯದಲ್ಲಿ, 2016-17 ರಿಂದ 2020-21ರವರೆಗೆ ಮಾನ್ಯ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಗೆ ಸಂಬಂಧಿಸಿದಂತೆ ಪ್ರತಿವರ್ಷಕ್ಕೆ ನಿಗದಿಯಾಗಿರುವ ರೂ.2 ಕೋಟಿಗಳ ಅನುದಾನವನ್ನು ಎಲ್ಲಾ ಮಾನ್ಯ ಶಾಸಕರುಗಳು ಸೂಚಿಸಿರುವ ಕಾಮಗಾರಿಗಳಿಗೆ ಒದಗಿಸಲಾಗಿದೆಯೇ; (ವರ್ಷವಾರು ವಿವರ ನೀಡುವುದು)

(ಆ) ಮೇಲಿನ ಯಾವ ಆರ್ಥಿಕ ವರ್ಷಗಳಲ್ಲಿ ಕಡಿಮೆ ಅನುದಾನ ಬಿಡುಗಡೆಯಾಗಿದೆ; ಕಡಿಮೆ ಅನುದಾನ ಒದಗಿಸಿದ ಆರ್ಥಿಕ ವರ್ಷಗಳಲ್ಲಿ ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಯಲ್ಲಿ ಇರುವ ಅನುದಾನವನ್ನು ಬಳಸಿ ಮಾನ್ಯ ಶಾಸಕರುಗಳು ಸೂಚಿಸಿರುವ ರೂ.2 ಕೋಟಿಗಳ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವಂತೆ ಆದೇಶಿಸಲಾಗಿದೆಯೇ;

(ಇ) ಆದೇಶಿಸಿದ್ದಲ್ಲಿ, 2018-19, 2019-20ನೇ ಸಾಲಿನಲ್ಲಿ ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಯಲ್ಲಿ ಬಾಕಿ ಇರುವ ಅನುದಾನವನ್ನು ಬಳಸಿಕೊಂಡು ಮಾನ್ಯ ಶಾಸಕರುಗಳು ಸೂಚಿಸಿರುವ 2 ಕೋಟಿ ಮೊತ್ತದ ಕಾಮಗಾರಿಗಳಿಗೆ ಅನುದಾನ ಒದಗಿಸಲಾಗಿದೆಯೇ; ಸದರಿ ಸಾಲಿನಲ್ಲಿ ಜಿಲ್ಲಾಧಿಕಾರಿಗಳ ಪಿ.ಡಿ.ಖಾತೆಯಲ್ಲಿ ಬಾಕಿ ಇದ್ದ ಅನುದಾನವೆಷ್ಟು? (ಜಿಲ್ಲಾವಾರು, ವರ್ಷವಾರು ಮಾಹಿತಿ ನೀಡುವುದು)